<u>ಕರ್ನಾಟಕ ವಿಧಾನ ಪರಿಷತ್ತು</u>

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 868 (952)
2) ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು)
3) ಉತ್ತರಿಸುವ ದಿನಾಂಕ : 28.09.2020
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾಡು ಪ್ರಾಣಿಗಳು ನಗರ ಪ್ರದೇಶಕ್ಕೆ ಬಂದು ಜನರ ಮೇಲೆ ಹಾವಳಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಹಾಗಿದ್ದಲ್ಲಿ, ಕಾಡು ಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ಕೈಗೊಂಡ ಕ್ರಮಗಳೇನು; (ಜಿಲ್ಲಾವಾರು ವಿವರಗಳನ್ನು ಒದಗಿಸುವುದು) | ರಾಜ್ಯದಲ್ಲಿ ವನ್ಯಪ್ರಾಣಿಗಳ ಹಾವಳಿಯನ್ನು ತಡೆಗಟ್ಟಲು ಇಲಾಖಾ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br>**1.** ರಾಜ್ಯದಲ್ಲಿರುವ ವನ್ಯಜೀವಿಗಳಿಗೆ ಸಂಪೂರ್ಣ ರಕ್ಷಣೆ ನೀಡುವ ಸಲುವಾಗಿ ರಾಷ್ಟ್ರೀಯ ಉದ್ಯಾನವನ, ಅಭಯಾರಣ್ಯ, ಹುಲಿ ಮೀಸಲು ಅರಣ್ಯ, ಸಂರಕ್ಷಿತ ಮೀಸಲು ಅರಣ್ಯಗಳನ್ನು ಘೋಷಿಸಲಾಗಿರುತ್ತದೆ.<br>**2.** ಅರಣ್ಯ ಪ್ರದೇಶದಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು 2019-20ನೇ ಸಾಲಿನಿಂದ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಅರಣ್ಯ ಪ್ರದೇಶಗಳಲ್ಲಿನ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತಹಂತವಾಗಿ ಕಿತ್ತು ಸ್ವಚ್ಛಗೊಳಿಸಿ ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ.<br>**3.** ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಇದರಿಂದ ಕಾಡಾನೆ ಹಾಗೂ ಇತರೆ ವನ್ಯಪ್ರಾಣಿಗಳು ಕಾಡಿನಿಂದ ಹೊರಗೆ ಬಾರದಂತೆ ನಿಯಂತ್ರಿಸಬಹುದಾಗಿದೆ.<br>**4.** ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ ಸೌರಶಕ್ತಿ ಬೇಲಿ ನಿರ್ಮಾಣ/ ನಿರ್ವಹಣೆ, ಆನೆ ತಡೆ ಕಂದಕ ನಿರ್ಮಾಣ/ ನಿರ್ವಹಣೆ ಮಾಡಲಾಗಿದ್ದು ಮತ್ತು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>**5.** ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ **Rapid Response Teams (RRT)** ಗಳನ್ನು, ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ Wireless Network ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ. |

| ಕ್ರಸಂ | ಪ್ರಶ್ನೆ | ಉತ್ತರ |
| --- | --- | --- |
| | | 6. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>7. ಕಾಡಾನೆ ಗುಂಪಿನಲ್ಲಿದ್ದ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ ಅದಕ್ಕೆ ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವಗಾಯ ತಪ್ಪಿಸಲು ಕ್ರಮವಹಿಸಲಾಗುತ್ತಿದೆ.<br>8. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>9. ಇತ್ತೀಚಿನ ದಿನಗಳಲ್ಲಿ ವನ್ಯಪ್ರಾಣಿಗಳ ಹಾವಳಿಯಿಂದ ಉಂಟಾಗುವ ಹಾನಿ ಪ್ರಕರಣಗಳಿಗೆ ಇ-ತಂತ್ರಾಂಶದ ಮೂಲಕ ಅರ್ಜಿಗಳನ್ನು ಸ್ವೀಕರಿಸಲಾಗುತ್ತಿದ್ದು, ಆದ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ನೇರವಾಗಿ ಸಂತ್ರಸ್ತರ ಖಾತೆಗೆ ಹಣ ಪಾವತಿಸುವ ಪ್ರಕ್ರಿಯೆಯನ್ನು **ಇ-ಪರಿಹಾರ ತಂತ್ರಾಂಶದ** ಮೂಲಕ ನಿರ್ವಹಿಸಲಾಗುತ್ತಿದೆ. |
| ಇ) | ಕಳೆದ 3 ವರ್ಷಗಳಿಂದ ಕಾಡುಪ್ರಾಣಿಗಳ ದಾಳಿಯಿಂದ ಎಷ್ಟು ಜನ ಪ್ರಾಣ ಕಳೆದುಕೊಂಡಿರುತ್ತಾರೆ;<br>ಗಾಯಗೊಂಡವರು ಎಷ್ಟು; | ಕಳೆದ 3 ವರ್ಷಗಳಲ್ಲಿ ವನ್ಯಪ್ರಾಣಿಗಳ ದಾಳಿಯಿಂದ ಉಂಟಾದ ಮಾನವ ಪ್ರಾಣ-ಹಾನಿ ಹಾಗೂ ಗಾಯಗೊಂಡ ಪ್ರಕರಣಗಳು ಹಾಗೂ ಪಾವತಿಸಿದ ದಯಾತ್ಮಕಧನದ ವಿಭಾಗವಾರು / ಜಿಲ್ಲಾವಾರು ವಿವರಗಳನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ. |
| ಈ) | ಎಷ್ಟು ಜನರಿಗೆ ಪರಿಹಾರ ವಿತರಿಸಲಾಗಿದೆ; ಪರಿಹಾರ ವಿತರಣೆ ಮಾಡಲು ಎಷ್ಟು ಬಾಕಿ ಇದೆ? (ಜಿಲ್ಲಾವಾರು ವಿವರಗಳನ್ನು ನೀಡುವುದು) | |

ಸಂಖ್ಯೆ: ಅಪಜೀ 165 ಎಫ್‌ಡಬ್ಲ್ಯೂಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಆರ್.ಬಿ. ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು)

ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 868 (952)ಕ್ಕೆ ಅನುಬಂಧ:

| ಕ್ರ ಸಂ | ವಿಭಾಗ | ಮಾನವಗಾಯ | | | | | | ಮಾನವ ಪ್ರಾಣ ಹಾನಿ | | | | | |
|---|---|---|---|---|---|---|---|---|---|---|---|---|---|
| | | 2018-19 | | 2019-20 | | 2020-21 (ಆಗಸ್ಟ್ ವರೆಗೆ) | | 2018-19 | | 2019-20 | | 2020-21 (15ನೇ ಸೆಪ್ಟೆಂಬರ್ ವರೆಗೆ) | |
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 1. | ರಾಮನಗರ | 14 | 9.34 | 2 | 0.457 | 1 | 1.00 | 1 | 5.00 | 2 | 10.00 | 2 | 15.00 |
| 2. | ಬೆಂಗಳೂರು ಗ್ರಾಮಾಂತರ | – | – | 3 | 0.18 | – | – | – | – | 1 | 5.00 | – | – |
| 3. | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ | 2 | 0.556 | 1 | 0.99 | – | – | – | – | 1 | 7.50 | – | – |
| 4. | ಕೋಲಾರ | 2 | 0.40 | 2 | 8.52 | – | – | 1 | 5.00 | 4 | 30.00 | 2 | 7.50 |
| 5. | ಬೆಳಗಾವಿ | 5 | 2.85 | 5 | 3.02 | – | – | 1 | 5.00 | – | – | – | – |
| 6. | ಬಾಗಲಕೋಟೆ | 1 | 0.441 | – | – | – | – | 1 | 5.00 | 1 | 5.00 | 1 | 7.50 |
| 7. | ಬಿಜಾಪುರ | 2 | 0.40 | 1 | 1.06 | – | – | 1 | 5.00 | – | – | – | – |
| 8. | ಗೋಕಾಕ್ | 7 | 0.739 | – | – | – | – | – | – | – | – | – | – |
| 9. | ಬಳ್ಳಾರಿ | 3 | 0.52 | 7 | 2.94 | 3 | 1.76 | 3 | 15.00 | 2 | 12.50 | – | – |
| 10. | ಚಿತ್ರದುರ್ಗ | 10 | 2.14 | – | – | 1 | 0.19 | – | – | 1 | 5.00 | – | – |
| 11. | ದಾವಣಗೆರೆ | 5 | 1.41 | 4 | 2.76 | – | – | – | – | – | – | – | – |
| 12. | ಕೊಪ್ಪಳ | 2 | 0.41 | – | – | – | – | – | – | – | – | – | – |
| 13. | ಬಿ.ಆರ್.ಟಿ | 5 | 0.875 | 7 | 0.82 | 7 | 1.85 | 3 | 15.00 | 1 | 5.00 | – | – |
| 14. | ಕಾವೇರಿ | 7 | 1.21 | – | – | – | – | 1 | 5.00 | 1 | 5.00 | – | – |
| 15. | ಮಲೈಮಹದೇಶ್ವರ | 2 | 0.27 | 1 | 0.62 | 3 | 0.28 | 1 | 5.00 | 4 | 20.00 | 1 | * |
| 16. | ಚಿಕ್ಕಮಗಳೂರು | 8 | 3.39 | 2 | 2.52 | – | – | 2 | 10.00 | 3 | 15.00 | – | – |
| 17. | ಭದ್ರಾ | 1 | 0.20 | – | – | – | – | – | – | – | – | – | – |
| 18. | ಕೊಪ್ಪ | 1 | 0.45 | 2 | 0.46 | 1 | 0.30 | 1 | 5.00 | 1 | 5.00 | – | – |
| 19. | ಗದಗ | 21 | 2.51 | – | – | – | – | – | – | – | – | – | – |
| 20. | ಹಾವೇರಿ | 1 | 0.300 | 4 | 0.30 | – | – | – | – | – | – | – | – |
| 21. | ಬಂಡೀಪುರ | 9 | 2.22 | 11 | 1.34 | – | – | 1 | 5.00 | 5 | 27.50 | – | – |
| 22. | ನಾಗರಹೊಳೆ | 1 | 0.30 | 4 | 0.74 | 3 | 1.65 | 4 | 20.00 | – | – | 1 | 7.50 |
| 23. | ಬೀದರ್ | 1 | 0.20 | – | – | – | – | – | – | 1 | 7.50 | – | – |

| ಕ್ರ ಸಂ | ವಿಭಾಗ | ಮಾನವಗಾಯ | | | | | | ಮಾನವ ಪ್ರಾಣ ಹಾನಿ | | | | | |
|---|---|---|---|---|---|---|---|---|---|---|---|---|---|
| | | 2018–19 | | 2019–20 | | 2020–21 (ಆಗಸ್ಟ್ ವರೆಗೆ) | | 2018–19 | | 2019–20 | | 2020–21 (15ನೇ ಸೆಪ್ಟೆಂಬರ್ ವರೆಗೆ) | |
| | | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 24. | ಕಲುಬರಗಿ | 11 | 2.21 | – | – | – | – | 1 | 5.00 | 1 | 5.00 | 2 | 15.00 |
| 25. | ರಾಯಚೂರು | – | – | – | – | – | – | – | – | 1 | 7.50 | – | – |
| 26. | ಯಾದಗಿರಿ | 2 | 0.19 | 2 | 0.60 | – | – | – | – | 1 | 5.00 | – | – |
| 27. | ದಾಂಡೇಲಿ | 1 | 0.024 | 1 | 0.20 | 1 | 0.30 | – | – | – | – | – | – |
| 28. | ಹಳಿಯಾಳ | 1 | 0.2333 | 2 | 0.53 | 1 | 1.00 | – | – | – | – | – | – |
| 29. | ಹೊನ್ನಾವಾರ | 2 | 0.52 | 3 | 0.50 | 1 | 0.20 | – | – | – | – | – | – |
| 30. | ಯಲ್ಲಾಪುರ | 8 | 3.38 | 1 | 0.05 | – | – | – | – | – | – | – | – |
| 31. | ಹಾಸನ | 4 | 2.42 | 4 | 0.97 | 1 | 0.22 | 1 | 5.00 | 3 | 15.00 | 1 | 7.50 |
| 32. | ತುಮಕೂರು | 24 | 12.31 | 26 | 11.89 | 9 | 1.86 | 1 | 5.00 | 5 | 32.50 | – | – |
| 33. | ಮಡಿಕೇರಿ | 4 | 1.13 | 4 | 1.81 | – | – | – | – | 2 | 12.50 | 3 | 22.50 |
| 34. | ವಿರಾಜಪೇಟೆ | 8 | 3.05 | 7 | 1.91 | – | – | – | – | 2 | 12.50 | 1* | – |
| 35. | ಮಡಿಕೇರಿ ವಜೀ | 3 | 1.94 | 1 | 0.11 | – | – | – | – | 1 | 5.00 | – | – |
| 36. | ಕುಂದಾಪುರ | 4 | 0.64 | 6 | 1.61 | – | – | 1 | 5.00 | 3 | 15.00 | – | – |
| 37. | ಮಂಗಳೂರು | 1 | 0.80 | 1 | 0.53 | – | – | – | – | – | – | – | – |
| 38. | ಮಂಡ್ಯ | 5 | 1.60 | – | – | – | – | 1 | 5.00 | – | – | – | – |
| 39. | ಹುಣಸೂರು | 7 | 3.57 | – | – | – | – | – | – | – | – | – | – |
| 40. | ಮೈಸೂರು | 9 | 2.56 | 6 | 1.65 | 1 | 0.30 | – | – | 2 | 12.50 | – | – |
| 41. | ಭದ್ರಾವತಿ | 7 | 1.24 | 1 | 0.187 | 1 | 0.30 | – | – | – | – | – | – |
| 42. | ಸಾಗರ | 1 | 0.031 | – | – | – | – | – | – | – | – | – | – |
| 43. | ಶಿವಮೊಗ್ಗ | 2 | 0.226 | 1 | 0.30 | – | – | – | – | – | – | – | – |
| | ಒಟ್ಟು | 214 | 67.27 | 122 | 48.75 | 34 | 11.21 | 26 | 130.00 | 49 | 265.00 | 14 | 82.50 |

(*) 2020–21ನೇ ಸಾಲಿನಲ್ಲಿ ಕೋಲಾರ, ಮಲೈ ಮಹದೇಶ್ವರ ಮತ್ತು ವೀರಾಜಪೇಟೆ ವಿಭಾಗಗಳಲ್ಲಿ 03 ಮಾನವ ಪ್ರಾಣಹಾನಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಮೃತ್ತ ವ್ಯಕ್ತಿಯ ವಾರಸುದಾರರ ದಾಖಲೆಗಳು ಸಲ್ಲಿಕೆಯಾದ ನಂತರ ದಯಾತ್ಮಕ ಧನ ಪಾವತಿಸಲು ಕ್ರಮ ತೆಗೆದುಕೊಳ್ಳಲಾಗುವುದು.

ವನ್ಯಪ್ರಾಣಿಗಳ ದಾಳಿಯಿಂದ ಉಂಟಾಗಿರುವ ಮಾನವಗಾಯ ಪ್ರಕರಣಗಳಲ್ಲಿ ಇ-ತಂತ್ರಾಂಶದ ಮೂಲಕ 60 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ವೈದ್ಯಕೀಯ ವರದಿ ಪಡೆದ ನಂತರ ಆದ್ಯತೆ ಮೇರೆಗೆ ನಿಯಮಾನುಸಾರ ಪರಿಶೀಲಿಸಿ, ನೇರವಾಗಿ ಸಂತ್ರಸ್ತರ ಖಾತೆಗೆ ಹಣ ಪಾವತಿಸುವ ಪ್ರಕ್ರಿಯೆಯನ್ನು ಇ-ಪರಿಹಾರ ತಂತ್ರಾಂಶದ ಮೂಲಕ ನಿರ್ವಹಿಸಲಾಗುತ್ತಿದೆ.